


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 19-03-2021 ಪ್ರಶ್ನೆ ಸಂಖ್ಯೆ : 239 (1781)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 19-03-2021

ಉತ್ತರಿಸುವ ಸಚಿವರು: ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವರು

ವಿಷಯ : ಗ್ರಾಮ ಪಂಚಾಯಿತಿಗಳಲ್ಲಿ ಆಸ್ತಿ ತೆರಿಗೆ ಸಂಗ್ರಹದ ಬಗ್ಗೆ

(ಅ) ಗ್ರಾಮ ಪಂಚಾಯಿತಿಗಳಲ್ಲಿ ಆಸ್ತಿ ತೆರಿಗೆ ಸಂಗ್ರಹ ತೀವ್ರವಾಗಿ ಕುಸಿದಿದ್ದು, ಗ್ರಾಮ ಪಂಚಾಯಿತಿಗಳ ಅಗತ್ಯ ವೆಚ್ಚಗಳ ನಿರ್ವಹಣೆಗೂ ಆದಾಯವಿಲ್ಲದೆ ಸಂಕಷ್ಟ ಎದುರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಬಂದಿದ್ದಲ್ಲಿ, ಗ್ರಾಮ ಪಂಚಾಯಿತಿಗಳ ಅಗತ್ಯ ವೆಚ್ಚಗಳ ನಿರ್ವಹಣೆಗೆ ಆದಾಯ ಒದಗಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; (ವಿವರ ಒದಗಿಸುವುದು)

(ಇ) ಬೆಳಗಾವಿ ಜಿಲ್ಲೆಯಲ್ಲಿರುವ ಒಟ್ಟು ಗ್ರಾಮ ಪಂಚಾಯಿತಿಗಳೆಷ್ಟು; ಪ್ರತಿ ಗ್ರಾಮ ಪಂಚಾಯಿತಿಗೂ ಪ್ರತಿ ತಿಂಗಳು ಬೇಕಾಗುವ ಅಗತ್ಯ ನಿರ್ವಹಣೆಯ ವೆಚ್ಚವೆಷ್ಟು; (ವಿವರ ಒದಗಿಸುವುದು)

(ಈ) ಬೆಳಗಾವಿ ಜಿಲ್ಲೆಯ ಪ್ರತಿ ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಕರ ಸಂಗ್ರಹಣೆಯ ಗರಿಷ್ಠ ಪ್ರಮಾಣ ಎಷ್ಟು; ಈವರೆಗೆ ಎಷ್ಟು ತೆರಿಗೆ ಸಂಗ್ರಹಿಸಲಾಗಿದೆ; ಎಷ್ಟು ತೆರಿಗೆ ಬಾಕಿ ಉಳಿದಿದೆ; (ಕಳೆದ ಮೂರು ವರ್ಷಗಳ ವಿವರ ಒದಗಿಸುವುದು)

(ಉ) ಗ್ರಾಮ ಪಂಚಾಯಿತಿಗಳಿಗೆ ತೆರಿಗೆ ಹೊರತುಪಡಿಸಿ ಬೇರೆ ಮೂಲಗಳಿಂದ ಸ್ವಯಂ ಆದಾಯ ಸೃಜಿಸುವ ಹೊಸ ಯೋಜನೆಗಳು ಸರ್ಕಾರದ ಮುಂದಿದೆಯೇ; ಅವುಗಳ ರೂಪ ರೇಷೆಗಳೇನು? (ವಿವರ ನೀಡುವುದು)